## ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಎಸ್.ಎಲ್. ಭೋಜೆಗೌಡ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 189

ಉತ್ತರಿಸಬೇಕಾದ ದಿನಾಂಕ : 14.12.2021

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಹಕಾರ ಇಲಾಖೆಯಿಂದ ಸಾರ್ವಜನಿಕರು ಮತ್ತು ರೈತರಿಗೆ ಅನುಕೂಲವಾಗಲು ರೂಪಿಸಿರುವ ಯೋಜನೆಗಳೇನು; ಈ ಯೋಜನೆಗಳ ಮಾನದಂಡಗಳೇನು; (ಪೂರ್ಣ ವಿವರ ನೀಡುವುದು) | ಸಹಕಾರ ಇಲಾಖೆಯಿಂದ ಸಾರ್ವಜನಿಕರು ಮತ್ತು ರೈತರಿಗೆ ಅನುಕೂಲವಾಗಲು ರೂಪಿಸಿರುವ ಯೋಜನೆಗಳು ಈ ಕೆಳಕಂಡಂತಿದೆ.<br>1. ಅಲ್ಪಾವಧಿ ಬೆಳೆ ಸಾಲ ಹಾಗೂ ಹೈನುಗಾರಿಕೆ ಉದ್ದೇಶಕ್ಕಾಗಿ ಕೆ.ಸಿ.ಸಿ.ಸಾಲ.<br>2. ಮಧ್ಯಮಾವಧಿ/ದೀರ್ಘಾವಧಿ ಕೃಷಿ ಸಂಬಂಧಿತ ಸಾಲಗಳು.<br>3. ಸ್ವ-ಸಹಾಯ ಗುಂಪುಗಳಿಗೆ ವಿತರಿಸಿದ ಸಾಲಗಳ ಮೇಲಿನ ಬಡ್ಡಿ ಸಹಾಯಧನ.<br>4. ಕೃಷಿ ಅಡಮಾನ ಸಾಲಗಳ ಮೇಲಿನ ಬಡ್ಡಿ ಸಹಾಯಧನ.<br>5. ಕೃಷಿ ಉತ್ಪನ್ನಗಳ ಸಂಗ್ರಹಣಾ ಶುಲ್ಕದಲ್ಲಿ ವಿನಾಯಿತಿ.<br>6. ವ್ಯವಸಾಯೇತರ ಸಾಲ.<br>7. ಪ.ಜಾ/ಪ.ಪಂ/ಹಿಂದುಳಿದವರ್ಗ/ಅಲ್ಪಸಂಖ್ಯಾತ ವರ್ಗ/ ಮಹಿಳೆ/ ವಿಕಲಚೇತನ/ ಬಿಪಿಎಲ್‌ದಾರರನ್ನು ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಸರ್ಕಾರದಿಂದ ಷೇರು ಸಹಾಯಧನ ಬಿಡುಗಡೆ ಮಾಡುವ ಯೋಜನೆ.<br>8. ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮಾರುಕಟ್ಟೆ ಮೂಲಭೂತ ಸೌಕರ್ಯ ಸ್ಥಾಪನೆ ಯೋಜನೆಯಡಿಯಲ್ಲಿ ಅನುದಾನ ಮಂಜೂರು ಮಾಡುವ ಯೋಜನೆ.<br>9. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಹಿಂದುಳಿದ ವರ್ಗ/ ಅಲ್ಪಸಂಖ್ಯಾತ ವರ್ಗದ ಸಹಕಾರ ಸಂಘಗಳಿಗೆ ಆರ್ಥಿಕ ಸಹಾಯ ಧನ ಬಿಡುಗಡೆ ಮಾಡುವ ಯೋಜನೆ. (ಸದರಿ ಯೋಜನೆಗೆ ಪ್ರಸಕ್ತ ಸಾಲಿನಲ್ಲಿ ಆಯವ್ಯಯ ಅವಕಾಶ ಕಲ್ಪಿಸಿರುವುದಿಲ್ಲ)<br>ಈ ಮೇಲಿನ ಯೋಜನೆಗಳ ಮಾನದಂಡಗಳ ಸಂಪೂರ್ಣ ವಿವರವನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |